ಲಿಖಿತ ಮೂಲಕ ಉತ್ತರಿಸುವ



ಕರ್ನಾಟಕ ವಿಧಾನ ಪರಿಷತ್ತು
ನೂರ ನಲವತ್ತನೆಯ ಅಧಿವೇಶನ
ಬುಧವಾರ, ದಿನಾಂಕ : 11 ನೇ ಮಾರ್ಚ್, 2020

ಪೋಡಿ ಮುಕ್ತ ಅಭಿಯಾನದ ಬಗ್ಗೆ

ಶ್ರೀ ಎನ್. ಅಪ್ಪಾಜಿಗೌಡ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) :-

574 (848) ಮಾನ್ಯ ಕಂದಾಯ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಭೂನ್ಯಾಯ ಮಂಡಳಿಯಲ್ಲಿ ಮಂಜೂರಾದ ಮತ್ತು ದರಖಾಸ್ತು ಮಂಜೂರಾದ ಅಂಶಿಕ ಜಮೀನುಗಳ ಖಾತೆದಾರರ ಪೋಡಿ ಮಾಡದೆ ಸರಿಯಾದ ಜಾಗದ ದಾಖಲೆಗಳನ್ನು ಸಿದ್ಧಪಡಿಸುವಲ್ಲಿ ಅಸಾಧ್ಯವಾಗಿದ್ದು, ಈ ಸಮಸ್ಯೆಯನ್ನು ಗಂಭೀರವಾಗಿ ಪರಿಗಣಿಸದಿರಲು ಕಾರಣಗಳೇನು ;

(ಆ) ಸಾಮಾನ್ಯ ಜನರಿಗೆ ಸರಿಯಾದ ಜಾಗದ ದಾಖಲೆಗಳನ್ನು ಸಿದ್ಧಪಡಿಸುವಲ್ಲಿ ನೆರವಾಗಲು ಪೋಡಿ ಮುಕ್ತ ಅಭಿಯಾನವನ್ನು ಯಾವಾಗ ಪ್ರಾರಂಭಿಸಲಾಗಿದೆ ; ಈ ಅಭಿಯಾನದಂತೆ ಮಂಡ್ಯ ಜಿಲ್ಲೆಯಲ್ಲಿ ಭೂ-ಮಾಪನ ಕಾರ್ಯ ಪೂರ್ಣಗೊಂಡ ಗ್ರಾಮಗಳು ಎಷ್ಟು ; (ಸಂಪೂರ್ಣ ಮಾಹಿತಿ ನೀಡುವುದು)

(ಇ) ನಾಗಮಂಗಲ ತಾಲ್ಲೂಕಿನಲ್ಲಿ ಭೂಮಾಪನ ಕಾರ್ಯ ಪೂರ್ಣಗೊಂಡ ಗ್ರಾಮಗಳಲ್ಲಿ ಖಾತೆದಾರರಿಗೆ ಪಹಣಿ ದಾಖಲಿಸಿ, ಪಹಣಿ ಪತ್ರ ನೀಡಲಾಗಿದೆಯೇ ? (ಸಂಪೂರ್ಣ ಮಾಹಿತಿ ನೀಡುವುದು)